Suppliment to the issue.

ಮಾತೃಭೂಮೀ ಗ್ರಂಥಮಾಲಾ
ಗ್ರಂಥ:—೧

# ಕರ್ನಾಟಕ
# ಮಧ್ಯಮ-ವ್ಯಾಯೋಗ.

ಅನುವಾದಕ

ಶ್ರೀ. ಕೃ. ಶ್ರೀ. ಬೆಟಗೇರಿ "ಕವಿಭೂಷಣ."

೧೯೨೩.
ಬೆಲೆ ೩ ಆಣೆಗಳು.

ಬೆಳಗಾವಿಯೊಳಗೆ ದೇವೇಂದ್ರಪ್ಪಾ ಫಡೆಪ್ಪಾ ಚೌಗುಲೆ,
ಇವರು ತಮ್ಮ "ಶ್ರೀಮಹಾವೀರ" ಮುದ್ರಣಾಲ
ಯದಲ್ಲಿ ಮುದ್ರಿಸಿದರು.
ಮತ್ತು
ಶ್ರೀ. ಕೃಷ್ಣಾಜಿ ಶ್ರೀನಿವಾಸ ಬೆಟಗೇರಿ ಕವಿಭೂಷಣ ಇವರು
ಬೆಳಗಾವಿಯಲ್ಲಿ ಹನುಮನಬೀದಿ ೧೫೬೫ನೇ
ನಂಬರಿನ ಮನೆಯಲ್ಲಿ ಪ್ರಕಟಿಸಿದರು.

## ಸಮರ್ಪಣವು.



ಈ ಚಿಕ್ಕಕೃತಿಯು

ಪೂಜ್ಯರ ಪಾದಗಳ ಆಶ್ರಯಹೊಂದಲು ಯೋಗ್ಯವಿದೆಯೋ, ಇಲ್ಲವೊ! ಹೇಳಲಾರೆ. ಆದರೆ, ಜಗದೊಡೆಯನಿಗೆ ಬಡಹಾರುವನು ಹಿಡಿತುಂಬ ಹುರಿದಕ್ಕಿಯನ್ನು ಕೊಟ್ಟು ಉಡಿತುಂಬ ಭಾಗ್ಯ ಪಡೆದುದರಲ್ಲಿ ನನ್ನ ನಂಬಿಗೆಯಿರುವುದರಿಂದ,

**ನನ್ನೀಹುಲ್ಲು ಹೊತ್ತಿಗೆಯನ್ನೇ ಹಿರಿಯದೆಂದುಭಾವಿಸಿ**

ಪರಮಪೂಜ್ಯ ಪಿತೃವರ

ವೈ. ವಾ. **ಶ್ರೀನಿವಾಸ ವೆಂಕಟೇಶ ಬಿಟಗೇರಿಯವರ**

ಅಡಿಗಳಿಗೆ ಆದರದಿಂದ ಅರ್ಪಿಸಿ

ಹೂವಿನಂತೆ ಹಸನಾದ ಹೊಸ ಹೊಸ ಹೊತ್ತಿಗೆಗಳನ್ನು ರಚಿಸಲು **ಹಿರಿಯರ ಹರಿಕೆಯನ್ನು ಹೊಂದುವೆನು.**

**ಶ್ರೀಕೃಷ್ಣ:—**

### ಒಪ್ಪೋಲೆ.

| ಪುಟ | ಸಾಲು | ತಪ್ಪು | ಒಪ್ಪು |
|---|---|---|---|
| ೧೦ | ೨೨ | ಮರಿಯುಲು | ಮುರಿಯುಲು |
| ೧೧ | ೧೫ | ಭೀಮ | ಘಟೋತ್ಕಚ |

ವಂದೇ ಮಾತರಮ್

ಶ್ರೀಮಹಾಕವಿ ಭಾಸವಿರಚಿತ

# ಮಧ್ಯಮ-ವ್ಯಾಯೋಗ.



( ಸೂತ್ರಧಾರನು ಪ್ರವೇಶಿಸಿ:—)

ಪದ " ಸ್ಮರಿಸುವೆ ನಾನಾದಿಯಲಿ ಶರಧಿಶಯನ ಶ್ರೀಹರಿಯಂ " ಎಂಬಂತೆ.

ಶ್ರೀಹರಿ ಚರಣವು ಸಂತತ ।
ವೀಯಲಿ ಸಮ್ಮೋದವನು ॥ ಪಲ್ಲ ॥

ಅಸುರವಧೂ ಹೃದಯವನುರೆ । ಕಸವಿಸಿಯೊಂದಿಸುತೆ ವಿಮಲ ॥
ಅಸಿಯೊಲು ಕುವಲಯದೊಲುಮಿಗೆ । ಮಿಸುಪ ನೀಲವರ್ಣಪಾದ ॥ ೧ ॥
ತಾರಿಪಸುರಪಥಶರಧಿಯ । ವೈದೂರ್ಯದ ಸಂಕ್ರಮವಿದು ॥
ಮೂರು ಲೋಕಗಳ ಮಿನುಗಿಪ । ಚಾರುರತ್ನ ಸಮಚರಣವು ॥ ೨ ॥

ಆರ್ಯ ಮಿಶ್ರರಿಗೆ ನನ್ನ ಬಿನ್ನಹವನ್ನು ಲಾಲಿಸಬೇಡುವೆನು. ಇದೇನಿದು! ನಾನು ಬಿನ್ನವಿಸಬೇಕೆಂದಿರುವನಿತರಲ್ಲಿಯೆ, ಇದಾರದೋ ಸ್ವರವು ಕೇಳಬರುತ್ತಿದೆ.

( ತೆರೆಯಲ್ಲಿ) ಭೋತಾತಾ! ಇವನಾರು.

**ಸೂತ್ರ:**—ಇರಲಿ! ತಿಳಿಯಿತು.

ಕಂದ ॥ " ಭೋ " ಶಬ್ದವ ಬಳಿಪುದರಿಂ ।
ಭೂಸುರರದು ನಿಸದವೀನುಡಿಯು ಮೇಣವರು ॥
ಕ್ಲೇಶವಗೊಂಡಿಹರಸುರನ ।
ಪಾಶದಿಸಿಲುಕಿರ್ದು ಶಂಕೆಯಿನಿತಿಲ್ಲಿದಕೆ ॥ ೧ ॥

( ಮರಳಿ ತೆರೆಯಲ್ಲಿ ) ಭೋ ತಾತಾ! ಇವನಾರು

ಸೂತ್ರ:—ಈಗ ಮಾತ್ರ ನಿಶ್ಚಯವಾಗಿ ತಿಳಿಯಿತು. ಹಿಡಿಂಬಾರಣಿಯಿಂದ ಹುಟ್ಟಿದ ರಾಕ್ಷಸಾಗ್ನಿಯೂ ಪಾಂಡವ ಮಧ್ಯಮ ಪುತ್ರನೂ ಆದ ಘಟೋತ್ಕಚನು, ನಿರುಪದ್ರವಿಗಳಾದ ಬ್ರಾಹ್ಮಣರನ್ನು ಪೀಡಿಸುತ್ತಿರುವನು. ಅಹಹ! ಹೆಂಡರುಮಕ್ಕಳುಗಳಿಂದ ಕೂಡಿದ ಆ ಬ್ರಾಹ್ಮಣನ ವೃತ್ತಾಂತವು, ಕಷ್ಟ! ಕಷ್ಟ! ಬಹು ಕಷ್ಟ!!

ಭಾ॥ ಷ॥ ಅಸುರ ತಾಂ ಬೆನ್ನಟ್ಟಿರಲು ಬಹು।
ಬಸವಳಿದ ಸತಿಸುತರೊಡನೆ ಇಹ।
ರಸವಿಹೀನನ ವೃದ್ಧವಿಪ್ರನವಸ್ಥೆಯು ಕಟಕಟ!॥
ಹಸುವುಮೇಣೆಳೆಗರುವಿನಿಂದಿಹ।
ಬಸವನನು ಹೆಬ್ಬುಲಿಯು ಹಿಂಬಾ।
ಲಿಸಲದಕ್ಕೊದಗುವ ಮಹಾದುಸ್ಥಿತಿಯೊಲಾಗಿಹುದು ॥ ೧ ॥

ಇಂತೆಂದು ಸೂತ್ರಧಾರನು ಹೋಗುವನು.

( ಇದು ಸ್ಥಾಪನೆಯು. )

( ಬಳಿಕ ಸತಿಸುತತ್ರಯರಿಂದೊಡಗೂಡಿದ ಕೇಶವದಾಸನೆಂಬ ವೃದ್ಧ ಬ್ರಾಹ್ಮಣನು, ಘಟೋತ್ಕಚನಿಂದ ಹಿಂಬಾಲಿಸಲ್ಪಟ್ಟವನಾಗಿ ಪ್ರವೇಶಿಸುವನು. )

ವೃದ್ಧ:—ಓಹೋ! ಇವನಾರು!

ಪದ ರಾಗ ಬಾಗೇಶ್ರೀ. ಝಂಪತಾಳ.

ಆರಿವನು! ಆರಿವನು! ಘೋರಕಾಯದ ಪುರುಷ ॥ ಪಲ್ಲ ॥
ತರುಣರವಿಕಿರಣದೊಲು। ಹರವಿದೀ ಕೇಶದಿಂ।
ಪಿರಿದಾದ ಪಿಂಗಲಾಯತನೇತ್ರದಿಂದಿರುವನಾರಿವನು! ॥ ೧ ॥
ವರಕೆಂತಸೂತ್ರವನು। ಧರಿಸಿದೀ ಬಲಶಾಲಿ।

ನೆರೆ ಮಿಂಚನಾಂತ ಕರಿ ಮೋಡದಂತಿರುವನಿವನಾರಿವನು! ॥ ೨ ॥

ಪ್ರಳಯಕಾಲದ ರುದ್ರನಂದದಿಂದಾಕೃತಿಯು ।
ತಳೆದು ನಮ್ಮೆದುರಿನಲಿ ಬಂದು ನಿಂದಿರುವನಿವನಾರಿವನು! ॥ ೩ ॥

**ಪ್ರಥಮ ಪುತ್ರ**:—ಭೋ ತಾತಾ! ಇವನಾರಿರಬಹುದು.

ಸೀಸಪದ್ಯ ॥ ಯುಗಲಗೃಹದಂತೆ ಜಗಜಗಿಪ ನಯನಂಗಳಿಂ ।
ಮಿಗೆ ಕೊಬ್ಬಿ ಹಬ್ಬಾಗಿರುವ ವಕ್ಷದಿಂ ॥
ಹಗಲನೆಳೆಗದಿರದೊಲು ಹೊಳೆವನವಿರಿಂ ಪೊನ್ನ ।
ದುಗುಲದುಡಿಗೆಯಲಿ ತಾನೊಪ್ಪುತಿಹನು ॥
ಕಾರಿರುಳಿನಂತೆ ಕರಿದಾದ ಮೈವಣ್ಣದಲಿ ।
ತೋರವಾಗಿಹ ಬಿಳಿಯ ಕೋರೆದಾಡೆ ॥
ತೋರುತಿಹವೆನಗೆ ಕಾರ್ಮೋಡದಿವಿರಾಜಿಸುವ ।
ತಾರಾಪ ಲೇಖದಂತಿರೆ ಸತ್ಯದಿಂ ॥ ೧ ॥

**ದ್ವಿತೀಯ ಪುತ್ರ**:—ಇವನಾರಯ್ಯಾ!

ಸೀಸಪದ್ಯ ॥ ಕಲಭದಶನದೊಲಿರ್ದ ದಂಷ್ಟ್ರಗಳು ಮತ್ತೆಲಾಂ- ।
ಗಲದಂತೆನಾಸವಿರುವೀ ಪುರುಷನು ॥
ಜ್ವಲಿಸಿದಗ್ನಿಯ ಕಾಂತಿಯಿಂ ಪುರಾರಿಯ ರೋಷ ।
ದೊಲು ಭಯಂಕರ ತೋರ್ಪನಾರೀತನು! ॥ ೧ ॥

**ತೃತೀಯ ಪುತ್ರ**:—ನಮ್ಮನ್ನು ಪೀಡಿಸುವ ಈತನು ಆರಿರಬಹುದು!

ಕಂದ ॥ ವರಗಿರಿಗೆ ವಜ್ರಪಾತಂ ।
ಸರುವ ಪತತ್ರಿಗಳಿಗಾಭಯಂಕರ ಸಾಳ್ವಂ ॥
ಕರಿಗಳ ಗುಂಪಿಗೆ ಸಿಂಗನು ।
ಮಿರುವಂತೆವೊಲೀತನೆಮಗೆ ಮಾರಿಯೆನಿಪನು ॥ ೧ ॥

ಬ್ರಾಹ್ಮಣಿ:—ನಮ್ಮನ್ನು ತೊಂದರೆಗೆಡೆಮಾಡಿದ ಈತನಾರು?

ಘಟೋತ್ಕಚ:—ಎಲೈ! ಬ್ರಾಹ್ಮಣ! ನಿಲ್ಲು ನಿಲ್ಲು.

ವಾ. ಷ॥ ಗರುಡಪಕ್ಷದ ಗತಿಯಗಾಳಿಯಿಂ ಸತಿಯಸಹಿ।
ತಿರುವ ಭುಜಗವು ರೋಷವಂ ಪೊಂದಿಯುಂ ಭೀತಿ।
ಬೆರೆಯಲಾರ್ತತೆಯ ಪೊಂದುವವೊಲೆನ್ನಯ ಭೀತಿಯಲಿ ಧೈರ್ಯ
ವನ್ನು ತೊರೆದು।
ಗುರುತಾಪವಂ ಪೊಂದಿರುವ ಪತ್ನಿಪುತ್ರರಂ।
ಪೊರೆಯಲ್ಕೆ ವಿಕಲಸಾಮರ್ಥ್ಯನಾಗಿರುತೀಗ್ಯೆ।
ಪೊರಡುವುದದೇಕೆ? ಭೂಸುರ ವಂಶವರನೆ! ಪೋಗದಿರು
ಪೋಗದಿರು ನೀನು ॥ ೧ ॥

ವೃದ್ಧ:—ಬ್ರಾಹ್ಮಣೀ ಅಂಜದಿರು! ಮಕ್ಕಳಿರಾ ಅಂಜಬೇಡಿರಿ! ಇವನ
ಮಾತುಗಳು ವಿಚಾರಭರಿತವಾಗಿರುತ್ತವೆ.

ಘಟೋತ್ಕಚ:—(ಸ್ವಗತ) ಅಯ್ಯೋ ಕಷ್ಟವು. ಅಖಿಲಜಗತ್ತಿನಲ್ಲಿ
ಎಲ್ಲ ಕಡೆಯಲ್ಲಿಯೂ ಎಲ್ಲ ಕಾಲದಲ್ಲಿಯೂ "ಬ್ರಾಹ್ಮಣರು ಪೂಜ್ಯರು" ಎಂಬುದ
ನ್ನರಿತಿರುವೆನು. ಆದರೆ ನಾನೀಗ ನನ್ನ ತಾಯಿಯ ಅಜ್ಞೆಯಂತೆ ಅಕಾರ್ಯಕ
ಶಂಕೆಯಿಲ್ಲದೆ ಉದ್ಯುಕ್ತನಾಗಿರುವೆನು.

ವೃದ್ಧ:—ಬ್ರಾಹ್ಮಣೀ! "ಈ ವನದಲ್ಲಿ ರಾಕ್ಷಸರಿರುವುದರಿಂದ ಎಚ್ಚ
ದಿಂದ ಹೋಗಬೇಕು." ಎಂದು ಜಲಕ್ಲಿನ್ನ ಮುನಿಯು ಹೇಳಿದುದು ನಿನ್ನ ಸ್ಮ
ಣೆಯಲ್ಲಿಲ್ಲವೇ? ಈಗ ನೋಡು ಅದೇ ಭಯವು ಎದುರಿಸಿರುವುದು.

ಬ್ರಾಹ್ಮಣಿ:—ಪೂಜ್ಯರು ತೊಂದರೆಗೊಳಗಾದಂತೆ ತೋರುವುದು.

ವೃದ್ಧ:—ಹಾಗಾದರೆ ದುರ್ದೈವಿಯಾದ ನಾನು ಮಾಡಲೇನು!

ಬ್ರಾಹ್ಮಣಿ:—ಆರನ್ನಾದರೂ ಕೂಗೋಣ.

ಪ್ರಥಮ:—ಅಮ್ಮಾ! ಕೂಗುವುದಾರನ್ನು!

ಭಾ. ಷ॥ ತಿಮಿರಯುತವಾಗಿರುವಗಿರಿಯಿಂ ।
ಸಮೆದಿರುವ ದಿಕ್ಪಥದ ಖಗಮೃಗ ।
ಸಮುದಯುದಲಿಡಿದಿರ್ದ ಮಾನವ ಶೂನ್ಯವಾಗಿರ್ದ ॥
ಭ್ರಮೆಯನೈದಿಸುವೀವನವು ಸಂ ।
ಯಮಿಗಳಿಗೆ ಮನೆಯಾಗಿರುವುದೀ ।
ಸಮಯುದಲಿಯಿಲ್ಲಿಗೆ ಬರುವರಾರೆಮ್ಮ ರಕ್ಷಿಸಲು ॥

ವೃದ್ಧ:—ಬ್ರಾಹ್ಮಣೀ ಅಂಜಬೇಡ ಈ ವನವು ಮುನಿಗಳ ವಾಸಸ್ಥಾನವೆಂದು ತಿಳಿದೊಡನೆ ನನ್ನ ಭೀತಿಯು ಓಡಿಹೋಯಿತು. ಏಕೆಂದರೆ ಇಲ್ಲಿಯೆ ಸಮೀಪದಲ್ಲಿ, ಪಾಂಡವರ ಬೀಡಾರವು ಇರಬಹುದೆಂದು ತೋರುವುದು.

ವಾ. ತ್ರಿ॥ ಶರಣಜನವತ್ಸಲರು ದೀನಜನ ಪಾಲಕರು ।
ನೆರೆಸಮರದೊಳು ಧುರಂಧರರಿಂಥ ದುಷ್ಕಾರ್ಯರ್ಗ ।
ನಿರತರನುದಂಡಿಸೆ ಸಮರ್ಥರಿರುತಿರುವರಾ ಪಾಂಡುಭೂಪಾಲಸುತರು॥

ಪ್ರಥಮ:—ಪೂಜ್ಯರೇ ಪಾಂಡವರೀಗ ಬೀಡಾರದಲ್ಲಿಲ್ಲವಂತೆ.

ವೃದ್ಧ:—ಅದು ನಿನಗೆ ಹೇಗೆ ತಿಳಿಯಿತು?

ಪ್ರಥಮ:—ಶತಕುಂಭ ಯಜ್ಞದ ಸಲುವಾಗಿ ಪಾಂಡವರು ಧೌಮ್ಯ ಋಷಿಗಳ ಆಶ್ರಮಕ್ಕೆ ಹೋಗಿರುವರೆಂದು ಅಲ್ಲಿಂದ ಬಂದ ಒಬ್ಬ ಬ್ರಾಹ್ಮಣನ ಮುಖದಿಂದ ತಿಳಿದುಕೊಂಡೆನು.

ವೃದ್ಧ:—ಅಕಟ! ಇನ್ನು ಮೇಲೆ ಉಪಾಯವಿಲ್ಲದವರಾದೆವು.

ಪ್ರಥಮ:—ಎಲ್ಲರೂ ಹೋಗಿಲ್ಲ. ಆಶ್ರಮರಕ್ಷಣಾರ್ಥವಾಗಿ ಮಧ್ಯಮನು ಇರುವನಂತೆ.

ವೃದ್ಧ:—ಹೀಗಿದ್ದರೆ ಎಲ್ಲ ಪಾಂಡವರೂ ಸಮೀಪದಲ್ಲಿದ್ದಂತೆಯೆ.

**ಪ್ರಥಮ:**—ಆದರೆ ಅವನೀಗ ವ್ಯಾಯಾಮಕ್ಕಾಗಿ ಎಲ್ಲಿಯೋ ದೂರ ಹೋಗಿರುವನೆಂದು ಕೇಳಿರುವೆನು.

**ವೃದ್ಧ:**—ಇನ್ನು ಮಾತ್ರ ನಿರಾಶರಾದೆವು. ಇರಲಿ, ಪುತ್ರಾ ಇವನನ್ನೇ ಪ್ರಾರ್ಥಿಸಿ ನೋಡುವೆನು.

**ಪ್ರಥಮ:**—ನಿಮ್ಮೀ ಪರಿಶ್ರಮವು ವ್ಯರ್ಥವಾಗುವುದು.

**ವೃದ್ಧ:**—ಪ್ರಾರ್ಥನೆಯೆಂದರೆ ಭಿಕ್ಷೆಯು; ಇದರಿಂದಲಾದರೂ ಏನಾಗುವುದೋ ನೋಡುವಾ! (ಘಟೋತ್ಕಚನಿಗೆ) ಎಲೈ ವೀರನೇ! ನಮಗೆ ಬಿಡುಗಡೆಯಾಗಲಿಕ್ಕೆ ಮಾರ್ಗವೇನಾದರೂ ಇರುವುದೋ!

**ಘಟೋ:**—ಒಂದು ಮಾರ್ಗವಿರುವುದು.

**ವೃದ್ಧ:**—ಅದಾವುದು?

**ಘಟೋ:**—ನನಗೊಬ್ಬ ತಾಯಿಯಿರುವಳು. ಅವಳು "ಮಗನೇ ನನ್ನ ಪಾರಣೆಗಾಗಿ ಈ ವನದಲ್ಲಿಯೇ ಹುಡುಕಿ ಯಾವನಾದರೊಬ್ಬ ಮನುಷ್ಯನನ್ನು ತೆಗೆದುಕೊಂಡು ಬಾ" ಎಂದು ಹೇಳಿರುವಳು. ಅದಕ್ಕಾಗಿ ನಾನಿಲ್ಲಿ ಹುಡುಕುತ್ತಿರಲು ನೀನು ದೊರೆತಿರುವಿ. ಸಚ್ಚರಿತ್ರೆಯಾದ ಈ ನಿನ್ನ ಸತಿಯಿಂದಲೂ ಇಬ್ಬರು ಮಕ್ಕಳುಗಳಿಂದಲೂ ಬಿಡುಗಡೆ ಹೊಂದಬೇಕೆಂಬ ಇಚ್ಛೆ ನಿನಗಿದ್ದರೆ, ಬಲಾಬಲವನ್ನು ತಿಳಿದುಕೊಂಡು ಒಬ್ಬ ಮಗನನ್ನು ನನಗೆ ಬಿಟ್ಟುಕೊಡು; ಇದೇ ಬಿಡುಗಡೆಯ ಮಾರ್ಗವು.

**ವೃದ್ಧ:**—ಎಲೈ ರಾಕ್ಷಸಾಧಮಾ!

**ಕಂದ ||** ಬಾಳುವುದೆಂತು ನಿಗಮಗಳ ।
ಜಾಲವನರಿತಿರ್ದ ವೃದ್ಧಭೂಸುರ ನಾನೀ ।
ಶೀಲಗುಣಾನ್ವಿತ ಸುತನಂ ।
ಕಾಲನೊಲಿರುತಿರುವ ಮಾನವಾಶನಗಿತ್ತು ॥ ೧ ॥

**ಘಟೋ**:– ದ್ವಿಜ ಶ್ರೇಷ್ಠಾ!

ಚೌಪದಿ॥ ನಿನ್ನ ಸುತನೊರ್ವನನ್ನೆನಗೆಯೀಯದಲೆ ।
ನನ್ನ ಬೇಡಿಕೆಯನ್ನು ಪೂರ್ತಿಗೊಳಿಸದಲೆ ॥
ಇನ್ನಿರ್ದೆಯಾದೊಡೀಗಳೆನಾಶಿಸುವೆನು ।
ನಿನ್ನನುಂ ಮೇಣ್ ಪತ್ನಿಪುತ್ರರೆಲ್ಲರನು ॥ ೧ ॥

**ವೃದ್ಧ**:— ಆಗಲಿ, ಇನ್ನು ಇದೇ ನನ್ನ ನಿಶ್ಚಯವು.

ಚೌಪದಿ॥ ಸಕಲವಂ ಗೈದು ಕೃತಕೃತ್ಯವಾಗಿರುವ ।
ನಿಖಿಲ ವಿಧಿಯಿಂದೆ ಸಂಸ್ಕೃತವಾಗಿಯಿರುವ ॥
ಮುಪ್ಪಿನಿಂ ಸವೆದಿರುವ ನನ್ನ ದೇಹವನು ।
ತಪ್ಪದೀಯುವೆ ದನುಜ ಶಿಖಿಗಾಹುತಿಯನು ॥ ೧ ॥

**ಬ್ರಾಹ್ಮಣಿ**:—ಆರ್ಯರೇ! ಬೇಡಬೇಡ! ತಾವೆಂದಿಗೂ ಹೀಗೆ ಮಾಡಕೂಡದು. ಪತಿಯನ್ನೆ ಧರ್ಮವೆಂದಿಟ್ಟುಕೊಂಡು ನಡೆಯುವುದು. ಪತಿವ್ರತೆಯರ ಶೀಲವು. ಆದುದರಿಂದ ಸಫಲತೆಯೊಂದಿದ ನನ್ನೀ ಶರೀರದಿಂದ, ಆರ್ಯರನ್ನೂ ಆರ್ಯರ ವಂಶವನ್ನೂ ರಕ್ಷಿಸಬೇಕೆಂದಾಶಿಸುವೆನು.

**ಘಟೋ**:—ನನ್ನ ತಾಯಿಗೆ ಸ್ತ್ರೀಯರು ಸಮ್ಮತರಿಲ್ಲ.

**ವೃದ್ಧ**:—ನಾನು ಬರುವೆನು.

**ಘಟೋ**:—ನೀನು ಬೇಡ. ಮುಪ್ಪಿನವನು.

**ಪ್ರಥಮ**:—ನಾನು ಕೊಂಚ ಮಾತಾಡಬೇಕೆನ್ನುವೆನು.

**ವೃದ್ಧ**—ಅದೇನು? ಹೇಳು.

**ಪ್ರಥಮ**:—ಮಹನೀಯರೇ!

ಕಂದ ॥ ಹಿರಿಯರನು ಪೊರೆಯಲೆಂದೀ ।
ಹರಣವನೀಯುವೆನುದನುಜಗದರಿಂದೆನ್ನಂ ॥

ವರವಂಶರಕ್ಷಣಕೆ ನೀವ್ ।
ತೊರೆವುದು ನಿಃಶಂಕೆಯಿಂದಲೆಂದಾಶಿಪೆನು ॥

**ದ್ವಿತೀಯ**:—ಅಣ್ಣಾ! ಹಾಗಾಗದು.

ಭಾ. ಷ.॥ ಕುಲದಿ ಲೋಕದಿ ಜ್ಯೇಷ್ಠಪುತ್ರನು ।
ಬಲಿಗೆಯುಂ ಪಡೆದಿಹನು ಪಿತೃಗಳ ।
ವೊಲುಮೆಗೆಡೆಯಾಗಿರುವನೆಂಬರು ಸಕಲಬುಧರದರಿಂ ॥
ಕುಲವನುಳಿಸಲು ನೀನು ಪೋಗುವು ।
ದೊಳಿತಹುದೆ? ಬೇಡೀದನುಜನಿಗೆ ।
ಬಲಿಯು ನೀಯುವೆನೆನ್ನದೇಹವನಾಜ್ಞೆಯೀಯುವುದು ॥ ೧ ॥

**ತೃತೀಯ**:—ಹಿರಿಯರೇ! ಹಾಗೆಂದಿಗೂ ಆಗದು.

ಕಂದ ॥ ಹಿರಿಯಣ್ಣಂದಿರು ತಂದೆಗೆ ।
ಸರಿಯಿಹರೆಂದೊರೆವರಾ ಮಹಾತ್ಮರುಮದರಿಂ ॥
ಹಿರಿಯರ ಹರಣವ ಹೊರೆಯಲು ।
ಕಿರಿಯನಿಗಪ್ಪಣೆಯ ನೀವುದೆಂದಾಶಿಪೆನು ॥ ೧ ॥

**ಪ್ರಥಮ**:—ತಮ್ಮಾ ಹಾಗಾಗದು.

ಸೀಸಪದ್ಯ ॥ ಪಿತನಿಗಾಪದವೊದವೆಸುತರಲ್ಲಿ ಪಿರಿಯುಸಂ- ।
ತತಯತ್ನಗೈದು ತಾರಿಪುದು ಯೋಗ್ಯಂ ॥
ಮತಿವಂತ! ಅದಕಾಗಿ ಪಿರಿಯುರಂ ರಕ್ಷಿಸ ।
ಲ್ಕತಿ ತವಕದಿಂದಾನು ಪೊರಮಡುವೆನು ॥ ೧ ॥

**ವೃದ್ಧ**:—ಹಿರಿಯ ಮಗನು ನನಗೆ ಪ್ರಿಯನಾದುದರಿಂದ ಅವನನ್ನು ನಾನು ಬಿಡಲಾರೆನು.

**ಬ್ರಾಹ್ಮಣಿ**:—ಆರ್ಯರಿಗೆ ಹಿರಿಯ ಮಗನು ಹೇಗೆ ಪ್ರಿಯನೋ ಹಾಗೆಯೆ ನನಗೆ ಕಿರಿಯ ಮಗನು ಪ್ರಿಯನು.

**ದ್ವಿತೀಯ:**—ತಾಯಿ ತಂದೆಗಳಿಗಿಬ್ಬರಿಗೂ ಬೇಕಾಗದ ನಾನು ಆರಿಗೆ ಪ್ರಿಯನು?

**ಘಟೋ:**—ಇದೋ ನೋಡು. ನಾನು ಪ್ರೀತಿಸುತ್ತೇನೆ ಶೀಘ್ರವಾಗಿ ನಡೆ.

**ದ್ವಿತಿಯ:**—ಚೌಪದಿ ॥ ಎನ್ನಹಿರಿಯರ ರಕ್ಷಣೆಯನು ನಾಂಮಾಡಿ ।
ಧನ್ಯತೆಯ ಪೊಂದುವೆನು ಹರಣಾವಂ ನೀಡಿ ॥
ತನ್ನ ಬಂಧುಸ್ನೇಹಕಿಂತ ದುರ್ಲಭವು ।
ಸನ್ನುತಶ್ರೇಷ್ಠಕಾಲಸ್ನೇಹ ನಿಜವು ॥ ೧ ॥

**ಘಟೋ:**—(ಸ್ವಗತ) ಅಹಹ! ಈ ಬ್ರಾಹ್ಮಣ ಬಟುವು ತನ್ನವರಲ್ಲಿ ಎಷ್ಟು ವಾತ್ಸಲ್ಯವುಳ್ಳವನಾಗಿರುವನು!

**ದ್ವಿತೀಯ:**—ತಾತಾ! ತಲೆವಾಗುತ್ತೇನೆ.

**ವೃದ್ಧ:**—ಮಗನೇ! ಇಲ್ಲಿ ಬಾ.

ಕಂದ ॥ ನಿನ್ನೀ ಪ್ರಾಣವಿನಿಮಯದ ।
ಲೆನ್ನನು ಮೇಣೆನ್ನ ಕುಲವ ಸಲುಹಿದಿಯದರಿಂ ॥
ಉನ್ನತಬ್ರಹ್ಮಲೋಕದ ।
ಸನ್ನುತಪದ ನಿನಗೆ ದೊರೆಯಲೆಂದು ಪರಸುವೆಂ ॥ ೧ ॥

**ದ್ವಿತೀಯ:**—ಅನುಗ್ರಹಿತನಾದೆನು (ತಾಯಿಗೆ) ಅಮ್ಮಾ ಅಭಿನಮಿಸುವೆನು.

**ಬ್ರಾಹ್ಮಣಿ:**—ಮಗನೇ! ಚಿರಂಜೀವಿಯಾಗು.

**ದ್ವಿತೀಯ:**—ಧನ್ಯನಾದೆನು (ಪ್ರಥಮನಿಗೆ) ಅಣ್ಣಾ ನಮಸ್ಕರಿಸುವೆನು.

**ಪ್ರಥಮ:**—ವತ್ಸಾ! ಬಾ!

ಸೀಸಪದ್ಯ ॥ ಶುಭಗುಣಗಳಿಂ ಪರಿಷ್ಕೃತನಾಗಿಹ ವರಾ ।
ನುಭವ! ನೀನೆನ್ನ ಬಿಗಿದಾಲಿಂಗಿಸೈ ॥

ಪ್ರಭೆಯನಾಂತಿರುವ ನಿನ್ನಯ ಕೀರ್ತಿಧರಣಿಯಂ ।
ಸುಭಗದಿಂದಾಲಿಂಗಿಸಲಿ ನಿತ್ಯವು ॥ ೧ ॥

**ದ್ವಿತೀಯ:**—ಅನುಗ್ರಹಿತನಾದೆನು.

**ತೃತೀಯ:**—( ದ್ವಿತೀಯನಿಗೆ ) ಅಣ್ಣಾ ಅಭಿವಂದಿಸುತ್ತೇನೆ.

**ದ್ವಿತೀಯ:**—ನಿನಗೆ ಸುಖವಾಗಲಿ!

**ತೃತೀಯ:**—ಧನ್ಯನಾದೆನು.

**ದ್ವಿತೀಯ:**—( ಘಟೋತ್ಕಚನಿಗೆ ) ವೀರನೇ ನಿನಗೆ ಸ್ವಲ್ಪ ಹೇಳುವುದಿದೆ.

**ಘಟೋ:**—ಹೇಳು! ತೀವ್ರವಾಗಿ ಹೇಳು!

**ದ್ವಿತೀಯ:**— ಈ ವನದಲ್ಲಿ ಸಮೀಪದಲ್ಲಿಯೇ ಜಲಾಶಯವಿದ್ದಂತೆ ಕಾಣುತ್ತಿದೆ. ಅಲ್ಲಿಗೆ ಹೋಗಿ, ಪರಲೋಕಕ್ಕೆ ಹೊರಡಲು ಸಿದ್ಧನಾದ ನನ್ನ ನೀರಡಿಕೆಯನ್ನು ಶಾಂತಪಡಿಸಿಕೊಂಡು ಬರುವೆನು.

**ಘಟೋ:**—ದೃಢವ್ಯವಸಾಯಿಯೇ! ಹೋಗು. ಆದರೆ ನನ್ನ ತಾಯಿಯ ಪಾರಣೆಯ ವೇಳೆಯು ಮೀರುವುದರಿಂದ ತೀವ್ರವೇ ಬಂದುಬಿಡು.

**ದ್ವಿತೀಯ:**—ತಾತಾ! ಹೋಗಿಬರುತ್ತೇನೆ. ( ಹೋಗುತ್ತಾನೆ. )

**ವೃದ್ಧ:**—ಅಯ್ಯೋ ಕಳೆದುಕೊಂಡೆವು; ಮಗನನ್ನು ಕಳೆದುಕೊಂಡೆವು.

ಪದ ಧಾಟಿ—" ನೀತಿಯಿದಲ್ಲೊ । ಪೌರವರಾಯಾ " ಎಂಬಂತೆ.

ಅಗಲಿದ ನಿಂದು । ನನ್ನಯ ಕಂದ । ಅಗಲಿದ ನಿಂದು ॥ ಪಲ್ಲ ॥
ಅಗಲಿದನಿಂದೆನ್ನ । ನಗೆಯ ಮೋರೆಯ ಚಿನ್ನ ।
ತಗುಬಗೆಯಾಗ್ವದು । ಬಗೆಯಲ್ಲಿಯಕಟಾ ॥ ಅನುಪಲ್ಲ ॥
ತೋರುತಲಿರಲು । ವಂಶಾದ್ರಿಗೆ । ಮೂರು ಕೋಡುಗಳು ॥
ತೋರವಾಗಿಹಮಧ್ಯ । ದೇರನು ಮರಿಯಲು ।
ಮೀರಿ ಸಂತಾಪವು । ಘೋರಪಡುವೆನು ॥ ೧ ॥

ಸುಮತಿವಾರಿಧಿಯು । ಪುತ್ರನು ನಿರು । ಪಮರೂಪನಿಧಿಯು ।
ಸುಮನದಿಂ ಶೋಭಿಪ । ಸುಮಹೀಜಾತವುಸಲೆ ।
ಸಮದೇಭದಂತದ । ಲಿಮುರಿದು ಪೋಯಿತು ॥ ೨ ॥

**ಘಟೋ:**—( ಸ್ವಗತ ) ಬ್ರಾಹ್ಮಣ ಪುತ್ರನು ಬರಲಿಕ್ಕೆ ತಡಮಾಡಿದನು. ತಾಯಿಯ ಪಾರಣೆಯ ವೇಳೆಯು ಮೀರುವುದು. ನಾನೀಗ ಮಾಡಲೇನು ( ಆಲೋಚಿಸಿ ವೃದ್ಧನಿಗೆ ) ಎಲೈ ಬ್ರಾಹ್ಮಣ! ನಿನ್ನ ಮಗನನ್ನು ಕೂಗು.

**ವೃದ್ಧ:**—ನಿನ್ನೀ ನುಡಿಯು ರಾಕ್ಷಸರಿಗೂ ಕೂಡ ಅಸಮ್ಮತವಾದುದಾಗಿರುವುದು.

**ಘಟೋ:**—ಸಿಟ್ಟು ಬಂದಿತೇನು? ಕ್ಷಮಿಸಬೇಕು. ಇದು ನನ್ನ ಸ್ವಭಾವ ದೋಷವು. ಇರಲಿ! ನಿನ್ನ ಮಗನ ಹೆಸರೇನು.

**ವೃದ್ಧ:**—ಅದನ್ನೂ ತಿಳಿಯಲಾರಿ.

**ಘಟೋ:**—ಒಳ್ಳೇದು ( ಪ್ರಥಮನಿಗೆ ) ಬ್ರಾಹ್ಮಣ ಕುಮಾರ! ನಿನ್ನ ತಮ್ಮನ ಹೆಸರೇನು?

**ಪ್ರಥಮ:**—ನಿರ್ಭಾಗ್ಯ, ಮಧ್ಯಮನು.

**ಭೀಮ:**—ಮಧ್ಯಮನೇ ಅವನಿಗೆ ಯೋಗ್ಯವಾದ ಹೆಸರು. ಇರಲಿ, ಅವನನ್ನು ನಾನೇ ಕರೆಯುತ್ತೇನೆ. ಎಲೈ! ಮಧ್ಯಮಾ ಮಧ್ಯಮಾ! ಶೀಘ್ರವಾಗಿ ಬಾ.

( ಬಳಿಕ ಭೀಮನು ಪ್ರವೇಶಿಸುತ್ತಾನೆ. )

**ಭೀಮ:**—ಅ! ಇದಾರ ಧ್ವನಿಯು!

ಪದ ಧಾಟಿ—" ಸದ್ಗುಣಾರ್ಣವಾ " ಎಂಬ ಪದದಂತೆ,

ಆರದೀ ಧ್ವನಿ । ತೋರವಾಗಿರುವುದೈ ॥ ಪಲ್ಲ ॥
ಖಗಸಮೂಹ ಬೆರೆತು । ಮಿಗಿಲು ಚೀರುವಂತೆ ।

ಬಗೆಗೆ ತೋರ್ಪುದೀಗ । ಮಿಗೆ ಕಠೋರವಾಗಿ ॥ ೧ ॥
ದ್ರುಮಸಮೂಹದಿಂದ । ಅಮಿತ ಸಂಕಟದಿಂದ ।
ಸಮನಿಸಿರ್ದ ವನದಿ । ಭ್ರಮೆಯನುಂಟುಮಾಡುವುದಾರದೀ ॥ ೨ ॥
ಮನಸಿಗೆ ಸಂತಾಪ । ವನು ಬೀರುತ್ತಲಿಹುದು ।
ಅನುಜ ಪಾರ್ಥವರನ । ಧ್ವನಿಯು ತೆರದಿ ತೋರುವುದಾರದೀ ॥ ೩ ॥

ಘಟೋ:—ಬ್ರಾಹ್ಮಣ ಕುಮಾರನು ತಡ ಮಾಡಿದನು. ತಾಯಿಯು ಪಾರಣೆಯ ವೇಳೆಯು ಮೀರುವುದು. ನಾನೇನು ಮಾಡಲಿ! ಆಗಲಿ, ಮತ್ತೊಮ್ಮೆ ನಿಡುಸರದಿಂದ ಕೂಗುವೆನು. ಎಲೈ! ಮಧ್ಯಮಾ! ತೀವ್ರ ಬಾರೈ!

ಭೀಮ:— ಈ ವನಾಂತರದಲ್ಲಿ ಮಧ್ಯಮಾ! ಮಧ್ಯಮಾ! ಎಂದು ಕೂಗಿ ನನ್ನ ವ್ಯಾಯಾಮಕ್ಕೆ ವಿಘ್ನ ಮಾಡುವವರು ಆರಿರಬಹುದು! ಆಗಲಿ ಅಲ್ಲಿಯೇ ಹೋಗಿ ನೋಡುವೆನು. ( ತುಸು ನಡೆದು ಹೋಗಿ ಘಟೋತ್ಕಚನನ್ನು ಕಂಡು ) ಅಹಹ! ಈ ಪುರುಷನು ದರ್ಶನೀಯನಾಗಿರುವನು.

ವಾ. ಷ.॥ ಪಿಂಗಲ ಭ್ರೂಯುಗಲ ಸ್ನಿಗ್ಧಗಂಭಿರ ಕಂ- ।
ಠಂ ಗಿಡಗದೊಲು ಮೂಗು ನಿಡಿದಾದ ಬಿಡುಗೂದ ।
ಲಂಗಳೀ ಸಿಂಗಮೊಗ ಸಿಂಗದಾಡೆಗಳು ಹರವಾದುರವು
ಕಠಿನಕಟಿಯು ॥
ಸಿಂಗವೈರಿಯ ನಡಿಗೆ ಕೊಬ್ಬಿರ್ದ ತೋಳ್ಗಳು ಮ- ।
ನಂಗೊಳುವುವಿವನು ಬಲಯುತ ಲೋಕವೀರತನು ।
ಸಂಗದಿಂ ರಕ್ಕಸಿಯುದರದಲ್ಲಿ ಜನಿಸಿದೊಲು ನಿಚ್ಚಳದಿ
ತೋರುತಿಹನು ॥ ೧ ॥

ಘಟೋ:—ಬ್ರಾಹ್ಮಣಕುಮಾರನು ತಡಮಾಡಿದನು. ತಾಯಿಯ ಪಾರಣೆಯ ವೇಳೆಯು ಮೀರುವುದು. ಇನ್ನೇನು ಮಾಡಲಿ! ಆಗಲಿ, ಮತಿಷ್ಟು ಗಟ್ಟಿಯಾಗಿ ಕೂಗುವೆನು. ಎಲೈ ಮಧ್ಯಮಾ! ತೀವ್ರವೇ ಬಾರಯ್ಯಾ!

ಭೀಮ:—ಇದೋ ನೋಡು ಬಂದಿರುವೆನು.

ಘಟೋ:--ಇವನು ನಿಶ್ಚಯವಾಗಿ ಬ್ರಾಹ್ಮಣಬಟುವಲ್ಲ. ( ಚನ್ನಾಗಿ ನೋಡಿ ) ಈ ಪುರುಷನು ದರ್ಶನೀಯನಾಗಿರುವನು.

ಸೀಸಪದ್ಯ ॥ ಸಿಂಗನೊಲುರೂಪ ಪೊಂದಾಳೆಯೊಳು ತೋಳು ಪ- ।
ಕ್ಷಂಗಳು ಖಗೇಂದ್ರ ಪಕ್ಷದೊಲಿರುವವು ॥
ಕಂಗಳಿಂ ಕಮಲನಯನನ ನೆನಹನೀವ ತಾ ।
ಕಂಗಳನ್ನೆಳೆವ ನಿಜಬಂಧುವಿನೊಲು ॥ ೧ ॥

( ಪ್ರಕಾಶವಾಗಿ ) ನಾನು ಮಧ್ಯಮನನ್ನು ಕರೆಯುತ್ತೇನೆ.

ಭೀಮ:—ಎಂತಲೇ ನಾನು ಬಂದಿರುತ್ತೇನೆ.

ಘಟೋ:—ನೀನು ಸಹ ಮಧ್ಯಮನೋ?

ಭೀಮ:—ಮತ್ತಾವನೂ ಅಲ್ಲ.



ಕಂದ ॥ ಮಧ್ಯಮನವಧ್ಯರಲಿ ನಾಂ ।
ಮಧ್ಯಮನುತ್ಸಿಕ್ತರಲ್ಲಿ ಸಕಲಭುವನದಿ ॥
ಮಧ್ಯಮನು ಸಹೋದರರೊಳು ।
ಮಧ್ಯಮನಿರುತಿಹೆನು ನಿಜದಿ ಶಂಕಿಸದಿರು ನೀ ॥ ೧ ॥

ಘ:—ಇರಬಹುದು.

ಭೀಮ:—ಮತ್ತು; ಕಂದ॥ ಮಧ್ಯಮನು ಪಂಚಭೂತದಿ ।
ಮಧ್ಯಮನೈ ಸಕಲ ಪಾರ್ಥಿವಾವಳಿಯುಲಿ ಮೇಣ್ ।
ಮಧ್ಯಮನು ಸಹೋದರರೊಳು ।
ಮಧ್ಯಮನಾಂ ಸರ್ವಕಾರ್ಯದಲಿ ದನುಜವರ॥೧॥

ವೃದ್ಧ:—ಸಾಂಗತ್ಯ॥ ಮಧ್ಯಮನೆಂದು ಪೇಳುವನೀತ ಪಾಂಡವ ।
ಮಧ್ಯಮನಿದು ನಿಶ್ಚಯವು ॥

ಎದ್ದು ಬಂದಿರ್ಪನು ತೊಂದರೆಯೊಳು ಸಿಲು ।
ಕಿರ್ದ್ದ ನಮ್ಮನು ಸಂರಕ್ಷಿಸಲು ॥ ೧ ॥

( ದ್ವಿತೀಯನು ಪ್ರವೇಶಿಸುವನು ).

ದ್ವಿತೀಯ:—ವಾ. ತ್ರಿ॥ ಪರಲೋಕದೊಳಗೆ ದುರ್ಲಭವಾಗಿರುವಮಹಾ ।
ಶರಜಿನಿಯ ಶರಜ ಪತ್ರದಿ ಪೊಳೆಯುವಾ ಜಲವ ।
ಸುರೆತನಗೆ ತಾನೆ ಕೊಂಡಾಚಮನಮಂಗೆಯ್ದು
ಬಂದೆನಾನಂದದಿಂದೆ ॥ ೧ ॥

( ಘಟೋತ್ಕಚನನ್ನು ಸಮೀಪಿಸಿ ) ಎಲೈ! ನಾನು ಬಂದಿರುವೆನು.

ವೃದ್ಧ:—( ಭೀಮನಿಗೆ ) ಅಯ್ಯಾ ಮಧ್ಯಮಾ! ಬ್ರಾಹ್ಮಣ ಕುಲವನು ಸಂರಕ್ಷಿಸು.

ಭೀಮ:—ಅಂಜಬೇಡಿರಿ ಅಂಜಬೇಡಿರಿ! ಈ ಮಧ್ಯಮನು ಅಭಿವಂದಿಸುತ್ತಾನೆ.

ವೃದ್ಧ:—ವಾಯುವಿನಂತೆ ದೀರ್ಘಾಯುಷಿಯಾಗು.

ಭೀಮ:—ಅನುಗ್ರಹಿತನಾದೆನು. ಆರ್ಯರಿಗೆ ಭಯವೆಂತಹದು?

ವೃದ್ಧ:—ಹೇಳುತ್ತೇನೆ ಕೇಳು. ನಾನು ಕುರುರಾಜನಾದ ಯುಧಿಷ್ಠಿರನಿಂದ ಆಳಲ್ಪಡುವ, ಕುರಜಾಂಗಲದಲ್ಲಿಯ ಯೂಪಗ್ರಾಮವಾಸಿಯು. ನನ್ನದು ಮಾಠರಸಗೋತ್ರ, ನನ್ನ ಹೆಸರು ಕೇಶವದಾಸ. ಇಲ್ಲಿಯೇ ಸಮೀಪದಲ್ಲಿರುವ ಉದ್ಯಾಮಕ ಗ್ರಾಮದಲ್ಲಿ, ಕೌಶಿಕಗೋತ್ರದ “ಯಜ್ಞ ಬಂಧು”ವೆಂಬ ನನ್ನ ಸೋದರಮಾವನಿರುತ್ತಾನೆ. ಆತನ ಮಗನ ಉಪನಯನದ ಸಲುವಾಗಿ ನಾವೆಲ್ಲರೂ ಹೊರಟಿರುವೆವು.

ಭೀಮ:—ಹೀಗೇನು? ದಾರಿಯಲ್ಲಿ ತೊಂದರೆಯೊದಗದಿರಲಿ. ಬಳಿಕ!

ವೃದ್ಧ:—ಬಳಿಕ ಈ.

ಭಾ. ಷ.॥ ಕರಿಯುಮೋಡದ ಮೆಯ್ಯುಮೇಣ್ ತಾ- ।
ವರೆಯೆಲೆಯು ಕಣ್ಣುಗಳ ಸಿಂಗನ ।
ತೆರದನಡಿಗೆಯು ಕೂರದಾಡೆಯು ದನುಜನಂಜದಲೆ ॥
ಪರಿಜನರ ಸಹಿತಿರುವ ನನ್ನನು ।
ವರಪರಾಕ್ರಮಿಯಾದ ನೀನಿರು ।
ತಿರಲು ನಿನ್ನೆದುರಿನಲಿ ಹಿಂಸಿಸಲೆಂದು ಬಂದಿಹನು ॥

ಭೀಮ:—ಇವನು ಬ್ರಾಹ್ಮಣರಿಗೆ ಮಾರ್ಗದಲ್ಲಿ ತೊಂದರೆಕೊಡುವನೋ? ಆಗಲಿ ಇವನನ್ನೀಗ ನಿಗ್ರಹಿಸಿಬಿಡುವೆನು. ( ಘಟೋತ್ಕಚನಿಗೆ ) ಎಲೈ! ನಿಲ್ಲು ನಿಲ್ಲು!

ಘಟೋ:—ಇದೋ ನಿಂತಿರುತ್ತೇನೆ.

ಭೀಮ:—ಈ ಬ್ರಾಹ್ಮಣನನ್ನೇಕೆ ಹಿಂಸಿಸುವಿ?

ಚೌಪದಿ॥ ಪುತ್ರನಕ್ಷತ್ರಂಗಳಿಂದೆ ಕೂಡಿರುವ ।
ಪತ್ರೀನಿಭಾಂಗವರ್ಣದಲಿ ಶೋಭಿಸುವ ॥
ವೃದ್ಧಬ್ರಾಹ್ಮಣ ಸುಧಾಂಶುವನು ನೆರೆ ನುಂಗಲ್ ।
ಸಿದ್ಧನಾಗಿಹ ರಾಹುವೆನೆ ತೋರುವಿಯೊ ದಲ್ ॥ ೧ ॥

ಘ:—ಅಹುದು ನಾನು ರಾಹುವೇ.

ಭೀಮ:— ಬೇಕಾದಂತಹ ಅಪರಾಧವನ್ನು ಮಾಡಿದರೂ ಬ್ರಾಹ್ಮಣರು ಅವಧ್ಯರು. ಆದುದರಿಂದ ಹೆಂಡತಿಮಕ್ಕಳುಗಳಿಂದೊಡಗೂಡಿದ ಈ ನಿರುಪದ್ರವಿ ದ್ವಿಜಸತ್ತಮನನ್ನು ಬಿಟ್ಟುಬಿಡು.

ಘ:—ಇಲ್ಲ, ಬಿಡುವುದಿಲ್ಲ.

ಭೀಮ:—( ಸ್ವಗತ ) ಇವನಾರ ಮಗನಾಗಿರಬಹುದಯ್ಯಾ!

ಕಂದ ॥ ನಿಜಸಹೋದರರ ಗುಣವಂ ।
ನಿಜದಿಂ ಕದ್ದಿಹನು ಬಾಲಶೌಂಡೀರ್ಯದಲಿ ॥

ಭುಜಬಲಸಂಯುತ ಪಾರ್ಥ- ।
ತ್ಮಜನಿಗೆ ಸಮನಿರುತಲವನ ನೆನಹನ್ನೀವಂ ॥ ೧ ॥

( ಪ್ರಕಾಶವಾಗಿ ) ಸುಮ್ಮನೆ ಬಿಟ್ಟುಬಿಡಯ್ಯಾ!

ಘ:— ಬಿಡುವುದಿಲ್ಲ.

ಕಂದ ॥ ಬಿಡುಯೆಂದೆನ್ನಯ ತಾತನು ।
ನುಡಿದೊಡೆಯುಂ ಬಿಡುವನಲ್ಲ ಮಾತ್ರಾಜ್ಞೆಯಲಿ ॥
ಪಿಡಿದಿರುವೀ ಭೂಸುರನನು ।
ನಡೆ ನಡೆ! ಜಡಮತಿಯೆ ನಿನ್ನ ನುಡಿಗೆ ಬಿಡುವೆನೆ? ॥ ೧ ॥

ಭೀಮ:—( ಸ್ವಗತ ) ತಾಯಿಯ ಆಜ್ಞೆಯಿಂದ ಹಿಡಿದಿರುವನೇನು! ಹಂ ಹಂ ಹೀಗಿದ್ದರೆ ಇವನು ಗುರುಜನರ ಸೇವೆಮಾಡುವವನಿರುವನು.

ಕಂದ ॥ ಮನುಜರಿಗೆ ಜನನಿಯೇ ತಾಂ ।
ಘನತರ ದೈವತಗಳಲ್ಲಿ ದೈವತಮಿಹಳು ॥
ಜನನಿಯಾಜ್ಞೆಯನು ಕೇಳಿಯೆ ।
ಅನೂಕೂಲಸ್ಥಿತಿಯ ನಾವು ಪೊಂದಿದೆವಲ್ತೆ? ॥ ೧ ॥

( ಪ್ರಕಾಶವಾಗಿ ) ಎಲೈ ವೀರಾ! ನಿನ್ನನ್ನೊಂದು ಮಾತು ಕೇಳುವುದಿದೆ.

ಘ: — ಕೇಳು! ಕೇಳು! ತೀವ್ರವಾಗಿ ಕೇಳು!

ಭೀಮ:—ನಿನ್ನ ತಾಯಿಯ ಹೆಸರೇನು?

ಘ:—ನನ್ನ ತಾಯಿಯು ಹಿಡಿಂಬೆಯೆಂದು ಹೆಸರುಳ್ಳ ರಾಕ್ಷಸೇಶ್ವರಿಯು.

ಸೀಸಪದ್ಯ ॥ ಸಲೆಮೆರೆವ ಕೌರವಾನ್ವಯದೀಪ ಪಾಂಡುಸುತ ।
ಬಲಭೀಮನಾ ಭಾಗ್ಯಶಾಲಿನಿಯುನು ॥
ಚಲುವ ಚಂದ್ರಮನು ರಜನೀಸತಿಯ ಗೈದಂತೆ ॥
ಬಲುಮೆಯಿಂದಲಿ ಸನಾಥಳಗೈದಿಹಂ ॥ ೧ ॥

ಭೀಮ:—ಇವನು ಹಿಡಿಂಬಿಯ ಮಗನೋ! ಹಾಗಾದರೆ ಇವನಿಗೆ ಗರ್ವವಿರುವುದು ಯೋಗ್ಯವಿದೆ.

ಚೌಪದಿ ॥ ರೂಪಸಾಮರ್ಥ್ಯಸತ್ವಗಳಿಂದಲಿವನು ॥
ತಾ ಪೋಲ್ವ ನಿಶ್ಶಂಕೆಯಿಂದೆ ಪಿರಿಯರನು ॥
ಪರರಲ್ಲಿ ನಿರ್ದಯತೆಯನ್ನು ತೋರುವುದು ॥
ಪಿರಿದಾದ ದುರ್ಗುಣವಿದೊಂದೆತ್ತಲಣದು ॥ ೧ ॥

( ಪ್ರಕಾಶವಾಗಿ ) ಸುಮ್ಮನೆ ಬಿಟ್ಟುಬಿಡಯ್ಯಾ!

ಘ:—ಬಿಡುವುದಿಲ್ಲವಯ್ಯಾ.

ಭೀಮ:—ಭೂಸುರಶ್ರೇಷ್ಠರೇ! ನಿಮ್ಮ ಮಗನನ್ನು ನೀವು ತೆಗೆದುಕೊಳ್ಳಿರಿ; ನಾನು ಈ ರಾಕ್ಷಸನನ್ನು ಹಿಂಬಾಲಿಸುವೆನು.

ದ್ವಿತೀಯ:—ಬೇಡ ಬೇಡ! ಹಿರಿಯರ ಪ್ರಾಣರಕ್ಷಣಾಪೇಕ್ಷೆಯಿಂದ ಈ ಮೊದಲೇ ನನ್ನ ಪ್ರಾಣವು ಒಪ್ಪಿಸಲ್ಪಟ್ಟಿದೆ. ಆದುದರಿಂದ ನೀನು ಹೋಗಲಾಗದು. ರೂಪಗುಣಸಂಪನ್ನನಾದ ನಿನ್ನಂಥ ಯುವಕನು, ಭೂತಲದಲ್ಲಿ ಬದುಕಿರಬೇಕು.

ಭೀಮ:—ಮಹನೀಯರೇ! ನಾನು ಕ್ಷತ್ರಿಯ ಕುಲೋತ್ಪನ್ನನು ಬ್ರಾಹ್ಮಣರು ಪೂಜ್ಯತಮರಾದುದರಿಂದ, ನನ್ನ ಶರೀರದಿಂದ ಬ್ರಾಹ್ಮಣಶರೀರವನ್ನು ವಿನಿಮಯಿಸುವೆನು.

ಘ:—( ಸ್ವಗತ ) ಇವನು ಕ್ಷತ್ರಿಯನೇನು! ಎಂತಲೆ ಇಷ್ಟು ಗರ್ವವಿದೆ. ಆಗಲಿ. ಇವನನ್ನೇ ಕೊಂಡುಕೊಂಡು ಹೋಗುವೆನು. ( ಪ್ರಕಾಶವಾಗಿ ) ಈ ಬ್ರಾಹ್ಮಣ ಕುಮಾರನನ್ನಾರು ಬಿಡುಗಡೆ ಹೊಂದಿಸುವರು?

ಭೀಮ:—ನಾನು.

ಘ:—ನೀನೇನು?

ಭೀಮ:—ಅಹುದು.

ಘ:—ಹಾಗಾದರೆ ನೀನೇ ನಡೆ.

ಭೀಮ:—ನಿನ್ನಂಥ ಬಲಶಾಲಿಯನ್ನು ನಾನು ಹಿಂಬಾಲಿಸಲಾರೆನು. ನನ್ನನ್ನು ಬಲಾತ್ಕಾರದಿಂದ ತೆಗೆದುಕೊಂಡು ಹೋಗುವ ಸಾಮರ್ಥ್ಯವು ನಿನ್ನಲ್ಲಿದ್ದರೆ, ತೆಗೆದುಕೊಂಡು ಹೋಗು.

ಘ:—ಏನು! ನೀನು ನನ್ನ ಪರಿಚಯವನ್ನರಿತೆಯೋ?

ಭೀಮ:—ಅಹುದು, ನನ್ನ ಮಗನು ಎಂದರಿತೆನು.

ಘ:—ಏನು ಏನು! ನಾನು ನಿನ್ನ ಮಗನೋ?

ಭೀಮ:—ಸಿಟ್ಟಾಗುವಿಯೇನು? ಸೈರಿಸು ಸೈರಿಸು! ಕ್ಷತ್ರಿಯರು ಎಲ್ಲ ಪ್ರಜೆಗಳಿಗೂ ಮಕ್ಕಳೆನ್ನುವರು. ಅದರಿಂದಲೆ ನಾನು ಹೀಗೆಂದೆನು.

ಘಟೋ:—ನೀನು ಅಂಜುಗುಳಿಯಂತೆ ಮಾಡುವುದೇಕೆ?

ಭೀಮ:—

ವಾ. ತ್ರಿ ॥ ಶಪಥದಿಂ ಪೇಳ್ವೆನಂಜಿಕೆಯೆಂಬದನ್ನರಿಯೆ ।
ಸುಪರಿಚಿತನಪ್ಪ ನಿನ್ನಿಂದದನು ತಿಳಿಯಲಾ ।
ಶಿಪೆನದರ ರೂಪಗುಣವಿಗುಣಗಳನೆಲ್ಲ ಬಿತ್ತರಿಸಿಪೇಳ್ವುದು ಭದ್ರನೇ ॥

ಘಟೋ:—ಇಗೋ ಭಯದ ಸ್ವರೂಪವನ್ನು ತಿಳುಹಿಸಿಕೊಡುತ್ತೇನೆ. ಕೈಯ್ಯಲ್ಲಿ ಆಯುಧವನ್ನು ತೆಗೆದುಕೋ.

ಭೀಮ:—ತೆಗೆದುಕೊಂಡೇ ಇರುವೆನು.

ಘಟೊ:—ಅದೆಲ್ಲಿದೆ.

ಭೀಮ:—ಕಂದ॥ ಪೊಂಗಂಬಡೂಲಿಹ ಪಗೆಯನು ।
ಭಂಗಿಸುವುದರಲ್ಲಿ ನಿರತವಾಗಿಹ ಬಲದೋ- ॥

ಳಿಂಗೆ ಸಮಮಿರ್ಪ ಗುರು ಶ- ।
ಸ್ತ್ರಂಗಳು ಭೂತಳದೊಳಿಹುದಸಾಧ್ಯವದರಿಯ್ಯೆ!॥೧॥

ಘಟೋ:—ನೀನಾಡುವ ನುಡಿಯು ನನ್ನ ತಂದೆ ಭೀಮಸೇನನಿಗುಚಿತ ವಾದುದು.

ಭೀಮ:—ಅವನಾವ ಭೀಮಸೇನನಯ್ಯಾ ಮತ್ತೆ! ಬ್ರಹ್ಮ ವಿಷ್ಣು ರುದ್ರ ಮೊದಲಾದವರಲ್ಲಿ ನಿನ್ನ ತಂದೆಯು ಆರಿಗೆ ಸರಿಯಾಗಿರುವನು?

ಘಟೋ:—ಎಲ್ಲರಿಗೂ.

ಭೀಮ:—ಛೇ! ಇದು ತೀರ ಸುಳ್ಳು.

ಘಟೋ:—ಏನು ಏನು? ಸುಳ್ಳೇ ಇದು? ನನ್ನ ತಂದೆಯನ್ನು ಹೀಯಾಳಿಸುವಿಯಾ! ತಡೆ. ಈ ಹಿರಿಮರವನ್ನು ಕಿತ್ತಿ ನಿನ್ನನ್ನು ಸದೆಯುತ್ತೇನೆ. (ಹಾಗೆ ಮಾಡಿ ತನ್ನಲ್ಲಿ) ಆ ಏನಿದು! ಇನ್ನೂ ಸಾಯಲಿಲ್ಲವೊ! ಈಗೇನು ಮಾಡುವುದು. ಒಳ್ಳೇದು, ಈ ಬೆಟ್ಟದ ಕೋಡುಗಲ್ಲನ್ನೇ ಕಿತ್ತು ಹೊಡೆಯುವೆನು.

ಭೀಮ:—ಸಿಟ್ಟಾದ ಕಾಡಾನೆಯು ಹೆಬ್ಬುಲಿಯನ್ನೆಂದೂ ಎದುರಿಸದು.

ಘಟೋ:—(ಆಶ್ಚರ್ಯದಿಂದ) ಇವನಿನ್ನೂ ಸಾಯಲಿಲ್ಲವೇ? ಇನ್ನೇನು ಮಾಡಲಿ! ಆಗಲಿ!

ಕು. ಷ.॥ ವಾಯುಸುತಸಂಭವನು । ವಾಯುವಿನ ಪೌತ್ರನಾ ।
ನಾಯುತಾಯುಧವಾಂತು ನಿಂತಿರಲ್ಕೆ ॥
ಸೋಯಿಸುವರಾರೊಳರು । ರಾಯರೊಳಗಗ್ಗಳೆಯ ।
ರೀಯುವನಿಯೊಳು ಬಲುಹಿನಿಂದೆನ್ನನು ॥ ೧ ॥

( ಇಂತು ನುಡಿದು ಇಬ್ಬರೂ ಕಾಳೆಗನಾಡುತ್ತಾರೆ. )

**ಘಟೋ**:—( ಭೀಮನನ್ನು ಬಂಧಿಸಿ ) ಕಾಡಾನೆಯು ದೃಢಪಾಶದಲ್ಲಿ ಸಿಲುಕುವಂತೆ ನೀನೀಗೆನ್ನ ಬಾಹುಪಾಶದಲ್ಲಿ ಸಿಲುಕಿರುವಿ. ಇನ್ನು ಇದರಿಂದೆ ನೀನು ಪಾರಾಗುವುದೆಂತು.

**ಭೀಮ**:—( ಸ್ವಗತ ) ಏನು! ಇವನಿಂದ ನಾನು ಬಂಧಿಸಲ್ಪಟ್ಟೆನೋ? ಎಲೈ ಸುಯೋಧನಾ! ನಿನ್ನ ಶತ್ರುಪಕ್ಷವು ಬಲಿಯುತ್ತಲಿರುವುದು; ನಿನ್ನ ಸಂರಕ್ಷಣೆಯ ಉಪಾಯವನ್ನು ಕಂಡುಕೋ! ( ಪ್ರಕಾಶವಾಗಿ ) ಎಲೈ! ನನ್ನ ಮಾತಿಗೆ ಕಿವಿಗೊಡು!

**ಘಟೋ**:—ಕಿವಿಗೊಟ್ಟೇ ಇರುವೆನು.

**ಭೀಮ**:—( ಯುದ್ಧ ಬಂಧದಿಂದ ಮುಕ್ತನಾಗಿ ).

ಚೌಪದಿ ॥ ನನ್ನಿಯಲ್ಲದ ಬಲದ ಗರುವಿಕೆಯು ನುಳಿಯೈ ।
ನಿನ್ನೊಡಲ ಪುರುಳನಾನರಿತೆನೆಂದರಿಯೈ! ॥
ಕಡುಗಲಿಗಳೊಡನೆ ತೋಳ್ ಜಗಳಗೈವಂದು ।
ಅಡರದೈದಣಿವು ದನುಜೇಂದ್ರ ನನಗೆಂದು ॥ ೧ ॥

**ಘಟೋ**:—( ಸ್ವಗತ ) ಎಲ! ಇದರಿಂದಲೂ ಇವನು ಸಾಯಲಿಲ್ಲವೇ! ಇನ್ನೇನು ಮಾಡುವುದು. ಹ. ತಿಳಿಯಿತು. ಮಾತೆಯ ಅನುಗ್ರಹದಿಂದ ನನಗೆ ಅವಗತವಿರುವ ಮಾಯಾ ಮಂತ್ರದಿಂದ ಇವನನ್ನು ಬಂಧಿಸಿ ಬಯ್ಯುವೆನು. ಆದರೆ ನೀರೆಲ್ಲಿ! (ಪ್ರಕಾಶವಾಗಿ) ಏ ಪರ್ವತವೇ! ನನಗೀಗ ನೀರುಬೇಕಾಗಿವೆ. ಇದೋ ನೀರು ಹರಿಯತೊಡಗಿದುವು. ( ಆಚಮನಮಾಡಿ ಮಂತ್ರಜಪಿಸಿ) ಎಲೈ! ಮಾನವವರನೇ! ಉತ್ಸವಕಾಲದಲ್ಲಿ ಇಂದ್ರಧ್ವಜವನ್ನು ರಜ್ಜುವಿನಿಂದ ಬಂಧಿಸುವಂತೆ ನಾನೀಗ ನಿನ್ನನ್ನು ಮಾಯಾಪಾಶದಿಂದ ಬಂಧಿಸುತ್ತೇನೆ. ಇನ್ನು ಮೇಲೆ ಮಾತ್ರ ಪರವಶನಾದ ನೀನು ಪಾರಾಗಲಾರಿ. ( ಹೀಗೆಂದು ಮಾಯೆಯಿಂದ ಬಂಧಿಸುತ್ತಾನೆ ).

**ಭೀಮ**:—( ಸ್ವಗತ ) ನಾನು ಮಾಯಾಪಾಶದಲ್ಲಿ ಸಿಲುಕಿದೆನೊ! ಇನ್ನೇನು ಮಾಡಲಿ! ಮಹೇಶ್ವರನ ಅನುಗ್ರಹದಿಂದ ನನಗೆ ಮಾಯಾಪಾಶ ಮೋಕ್ಷಮಂತ್ರವು ಬರುತ್ತಿದೆ. ಅದನ್ನೀಗ ಜಪಿಸುವೆನು. ಆದರೆ ನೀರೆಲ್ಲಿರುವವು? ( ಪ್ರಕಾಶವಾಗಿ ) ಬ್ರಾಹ್ಮಣ ಕುಮಾರಾ! ನಿನ್ನ ಕಮುಂಡಲದಲ್ಲಿರುವ ನೀರನ್ನು ಕೊಡು.

**ವೃದ್ಧ**:—ಇದುಕೋ ನೀರು.

( ನೀರು ಕೊಡಲು ಭೀಮಸೇನನು ಆಚಮನಮಾಡಿ, ಮಂತ್ರ ಜಪಿಸಿ, ಮಾಯಾಪಾಶದಿಂದ ಮುಕ್ತನಾಗುತ್ತಾನೆ ).

**ಘಟೋ**:– ( ಸ್ವಗತ ) ಏನಿದು! ಮಾಯಾಪಾಶವೂ ನಿರುಪಯುಕ್ತ ವಾಯಿತಲ್ಲ. ಇನ್ನು ಮಾಡಬೇಕೇನು! ( ಭೀಮಸೇನನಿಗೆ ) ಏನಯ್ಯಾ! ನೀನು ನನಗೆ ಮೊದಲಿಗೆ ಕೊಟ್ಟ ಮಾತು ನೆನಪಿನಲ್ಲಿದೆಯೊ?

**ಭೀಮ**:—ಅಹುದು ನೆನಪಿನಲ್ಲಿದೆ. ನೀನು ಮುಂದೆ ನಡೆ.

( ಎಂದಿಬ್ಬರೂ ನಡೆಯುತ್ತಾರೆ).

**ವೃದ್ಧ**:—ಮಕ್ಕಳಿರಾ! ಈ ವೃಕೋದರನು.

ಕಂದ ॥ ಹಿರಿವಳೆಯುನರಿವು ಗೆಯ್ಯದೆ ।
ಭರದಿಂ ಮೈಜಾಡಿಸುತ್ತೆ ನಡೆವ ವೃಷಭನೋಲ್ ।
ಗುರುಬಲಯುತ ರಕ್ಕಸನಂ ।
ಪರಿಭವವಂಗೊಳಿಸಿ ನಡೆದಿಹನು ಲೀಲೆಯುಲಿ ॥ ೧ ॥

**ಘಟೋ**:—ಇಲ್ಲಿಯೇ ನಸುನಿಲ್ಲು. ನಿನ್ನಾಗಮನ ವಾರ್ತೆಯನ್ನು ನನ್ನ ತಾಯಿಗೆ ತಿಳಿಸಿ ಬರುವೆನು.

**ಭೀಮ**:—ಒಳ್ಳೇದು ಹೋಗು.

( ಘಟೋತ್ಕಚನು ತಾಯಿಯು ಹತ್ತರ ಬರುವನು )

**ಘಟೋ**:—ಮಾತೇ! ಅಭಿವಂದಿಸುವೆನು. ಬಹಳ ವೇಳೆಯಿಂದಲೂ ಅಪೇಕ್ಷಿಸುತ್ತಿರುವ ನಿನ್ನ ಅಹಾರಕ್ಕಾಗಿ ಮನುಷ್ಯನೊಬ್ಬನನ್ನು ತಂದಿರುವೆನು.

**ಹಿಡಿಂಬೆ**:—(ಪ್ರವೇಶಿಸಿ) ಮಗನೇ ಚಿರಂಜೀವಿಯಾಗು. ಎಂತಹ ಮನುಷ್ಯನನ್ನು ತಂದಿರುವಿ?

**ಘಟೋ**:—ಅಮ್ಮಾ! ಅವನು ಮಾತಿನಿಂದಲೇ ಮನುಷ್ಯನೇ ಹೊರತು ಸಾಮರ್ಥ್ಯದಿಂದೇನೂ ಅಲ್ಲ.

**ಹಿಡಿಂಬೆ**:—ಅದೇಕೆ, ಅವನು ಬ್ರಾಹ್ಮಣನೋ?

**ಘಟೋ**:—ಅಲ್ಲ. ಬ್ರಾಹ್ಮಣನಲ್ಲ.

**ಹಿಡಿಂಬೆ**:—ಹಾಗಾದರೇನು ವೃದ್ಧನೋ?

**ಘಟೋ**:—ವೃದ್ಧನೂ ಅಲ್ಲ.

**ಹಿಡಿಂಬೆ**:—ಮತ್ತೆಯೇನು ಹುಡುಗನೋ?

**ಘಟೋ**:—ಹುಡುಗನೂ ಅಲ್ಲ.

**ಹಿಡಿಂಬೆ**:—ಹೀಗಿದ್ದರೆ ಅವನನ್ನು ನೋಡಿಯಾದರೂ ನೋಡೋಣ (ತುಸು ನಡೆದು ದೂರದಿಂದ ಭೀಮಸೇನನನ್ನು ನೋಡಿ) ನೀನು ಈ ಮನುಷ್ಯನನ್ನು ತಂದೆಯಾ?

**ಘಟೋ**:—ಅಮ್ಮಾ ಇವನಾರು?

**ಹಿಡಿಂಬೆ**:—ಉನ್ಮತ್ತನೇ! ಇದು ದೈವತವು.

**ಘಟೋ**:—ಆರ ದೈವತವು?

**ಹಿಡಿಂಬೆ**:—ನಮ್ಮಿಬ್ಬರದೂ.

**ಘ**:—ಅದು ಹೇಗೆ? ಇದಕ್ಕೆ ಪ್ರತ್ಯಯವೇನು?

ಹಿಡಿಂಬೆ:—ಇದೇ ಪ್ರತ್ಯಯವು (ಭೀಮಸೇನನಿಗೆ ನಮಸ್ಕರಿಸಿ) ಆರ್ಯಪುತ್ರರಿಗೆ ಜಯವಾಗಲಿ!

ಭೀಮ:- -ಇವಳಾರು! ಇದೇನು ಇವಳು ನನ್ನ ಹಿಡಿಂಬೆಯು!!

ಕಂದ ॥ ದೇಶವನು ತೊಲಗಿವನದಲಿ ।
ವಾಸಿಸುತಿರುವಂದು ಕರುಣದಿಂದೆಮ್ಮನು ನೀ ॥
ಪೋಷಿಸಿದಿ ತಾಪವನ್ನಳಿ- ।
ದಾಸುಖಸಾಗರದಿ ಮುಳುಗಿಸಿದಿ ಪ್ರಿಯದೇವಿ! ॥ ೧ ॥

ಹಿಡಿಂಬೇ! ಇದೇನು, ಗೊಂದಲವೇನಿದು!

ಹಿಡಿಂಬೆ:—( ಕಿವಿಯಲ್ಲೇನೋ ಹೇಳಿ ) ಹೀಗೆ.

ಭೀಮ:—ಪ್ರಿಯೇ! ನೀನು ಜಾತಿಯಿಂದ ರಾಕ್ಷಸಿಯೇಹೊರತು ನೀತಿಯಿಂದಲ್ಲ.

ಹಿಡಿಂಬೆ:- -( ಘಟೋತ್ಕಚನಿಗೆ ) ಮೂರ್ಖಾ! ನಿನ್ನನ್ನು ಹಡೆದವರಿಗೆ ನಮಸ್ಕರಿಸು.

ಘಟೋ:—ತಾತಾ! ಧಾರ್ತರಾಷ್ಟ್ರವನದಾವಾಗ್ನಿಯಾದೀ ಘಟೋತ್ಕಚನು ಅಭಿವಂದಿಸುತ್ತಾನೆ; ಬಾಲಕನ ಅಪರಾಧವನ್ನು ಕ್ಷಮಿಸಬೇಕು.

ಭೀಮ:—ಬಾ ಮಗನೇ! ನಿನ್ನೀ ಅಪರಾಧವೇ ನನಗೆ ಪ್ರಿಯವಾಗಿರುವುದು. ( ಎಂದು ಅಪ್ಪಿಕೊಂಡು ) "ಧಾರ್ತರಾಷ್ಟ್ರಕುಲದವಾಗ್ನಿಯಾದ ಪುತ್ರನನ್ನೇ ನಿನ್ನ ಹಿರಿಯರು ಅಪೇಕ್ಷಿಸುತ್ತಾರೆ. ಪುತ್ರಾ ಅತಿ ಬಲಪರಾಕ್ರಮಶಾಲಿಯಾಗು.

ಘಟೋ:—ಅನುಗ್ರಹಿತನಾದೆನು.

ವೃದ್ಧ:—( ಸ್ವಗತ ) ಇವನು ಭೀಮಸೇನನ ಪುತ್ರ ಘಟೋತ್ಕಚನೋ?

ಭೀಮ:—ಮುದ್ದುಗುವರಾ! ಈ ಮಹೀಸುರ ಶ್ರೇಷ್ಠರಿಗೆ ನಮಸ್ಕರಿಸು.

ಘಟೋ:—ಭಗವನ್! ವಂದಿಸುತ್ತೇನೆ.

ವೃದ್ಧ:—ತಂದೆಯಂತೆ ಗುಣಕೀರ್ತಿ-ಸಂಪನ್ನನಾಗು.

ಘಟೋ:—ಧನ್ಯನಾದೆನು.

ವೃದ್ಧ:—ವೃಕೋದರಾ! ನೀನೆನ್ನ ಕುಲವನ್ನು ಸಂರಕ್ಷಿಸಿ ನಿನ್ನ ಕ ವನ್ನುದ್ಧರಿಸಿದಿ, ನಾವಿನ್ನು ಹೋಗಿ ಬರುತ್ತೇವೆ.

ಭೀಮ:—ಕಂದ॥ ನಿಮ್ಮಯನುಗ್ರಹದಿಂದಲಿ ।

ಸುಮ್ಮಾನವನಾಂತೆವಿಂದು ನನಿಹದಲಿಲ್ಲಿ ॥

ನಮ್ಮಾಶ್ರಮವಿದೆ ಕೆಲದಿನ ।

ಸಮ್ಮುದದಿಂದಿರ್ದು ವಿಶ್ರಮಿಸಿ ಪೋಗುವುದೈ! ॥ ೧

ವೃದ್ಧ:—ನಮ್ಮ ಜೀವವನ್ನುಳಿಸಿದುದೇ ಅತಿಥ್ಯಕ್ಕಿಂತ ಹೆಚ್ಚಿನದಾಯಿ ನಾವೀಗ ಹೋಗುವೆವು.

ಭೀಮ:—ಆಗಲಿ ಹೋಗಿ ಬನ್ನಿರಿ.

ವೃದ್ಧ:—ಶುಭವಾಗಲಿ ( ಪುತ್ರಕಲತ್ರರಿಂದ ಕೂಡಿದ ಕೇಶವದಾಸ ಹೊರಡುತ್ತಾನೆ. )

ಭೀಮ:—ಹಿಡಿಂಬೇ! ಇಲ್ಲಿ ಬಾ. ವತ್ಸ ಘಟೋತ್ಕಚಾ! ಇಲ್ಲಿ ಈ ಭೂಸುರವರರನ್ನು ಆಶ್ರಮದ್ವಾರ ಪರ್ಯಂತ ಕಳಿಸಿ ಬರೋಣ.

ಕಂದ ॥ ವನಧಿಯು ನದಿಗಳಿಗೆ ಹುತಾ ।

ಶನನಾಹುತಿಗಳಿಗೆ ಸಕಲ ಇಂದ್ರಿಯಗಳಿಗಾ ॥

ಮನವು ಪ್ರಭುವಿರುವುದೆಂತೋ ।

ವನಜಾಕ್ಷನುಪೇಂದ್ರನಂತೆ ಪ್ರಭುವಿಹನೆಮಗೆ ॥ ೧ ॥

ಅಂತಹ ಪ್ರಭುವು ಸಕಲರಿಗೂ ಸುಖವನ್ನೀಯಲಿ!

( ಎಲ್ಲರೂ ಹೋಗುತ್ತಾರೆ. )

**ಸಂಪೂರ್ಣವಾದುದು.**

# ಬಿನ್ನಹ.

ಬರೆದು ಬಹಳ ದಿವಸಗಳಾದ ಈ ಚಿಕ್ಕ ಹೊತ್ತಿಗೆಯನ್ನು ವಾಚಕರ ಕೈಯೊಳಗೆ ಕೊಡಲಿಕ್ಕೆ ಸಂತೋಷವೆನಿಸುವುದು. ಸಂಸ್ಕೃತ ವಾಙ್ಮಯಕ್ಕೆ ಲಲಾಮಭೂತನಾದ ಮಹಾಕವಿ ಭಾಸನ ಹೆಸರನ್ನು ಹಲವರು ಕೇಳಿರಬಹುದು. ಕಾಲಿದಾಸನಿಗೂ ಕೂಡ ಮಾನ್ಯನಾದ ಈ ಕವಿಯ ಯೋಗ್ಯತೆಯು ವರ್ಣಿಸಲ ಸಾಧ್ಯವಾದುದು. ಸಂಸ್ಕೃತದಲ್ಲಿರುವ " ಮಧ್ಯಮವ್ಯಾಯೋಗ " ಎಂಬ ಚಿಕ್ಕ ದೃಶ್ಯಕಾವ್ಯವು ಈ ಭಾಸಕವಿ ಕೃತವೆಂದೇ ಪ್ರಸಿದ್ಧವಿದೆ, ( ಕೆಲವರು ಇದು ಭಾಸಪ್ರಣೀತವಲ್ಲವೆಂದು ವಾದಿಸುವುದನ್ನೂ ನಾನು ಕೇಳಿರುವೆನು. ) ಅದನ್ನು ಓದಿದ ನನಗೆ, ಅದರ ಸವಿಯನ್ನು ಸಂಸ್ಕೃತವನ್ನರಿಯದ, ಕನ್ನಡ ಬಂಧು ಭಗಿನಿಯರು ನೋಡಲೆಂದು ಇಚ್ಛೆಯುಂಟಾಗಿ ಆ ಕೃತಿಯನ್ನು ಕನ್ನಡದಲ್ಲಿ ಪರಿವರ್ತಿಸಿರುವೆನು. ಈ ಪರಿವರ್ತನೆಯಲ್ಲಿ, ಮೂಲದಲ್ಲಿಲ್ಲದ ಕೆಲವು ಶಬ್ದಗಳು ( ಸ್ವಗತ, ಪ್ರಕಾಶ, ಇತ್ಯಾದಿ ) ಕಂಡುಬರಬಹುದು. ಕಥೆಯು ಚನ್ನಾಗಿ ಕಂಡುಬರಬೇಕೆಂದೇ ಹೀಗೆ ಮಾಡಿರುವುದು.

ಈ ಮಧ್ಯಮವ್ಯಾಯೋಗವೆಂಬುದು ಪಾಂಡವರ ಅರಣ್ಯವಾಸದಲ್ಲಿಯ ಒಂದು ಪ್ರಸಂಗವು. ಹಿಡಿಂಬೆಗೆ ತನ್ನ ಪತಿಯಾದ ಭೀಮಸೇನನ್ನು ನೋಡಬೇಕೆಂದು ಇಚ್ಛೆಯಾಗಿ, ಸಾಧುಜನ ಪಾಲಕರಾದ ಪಾಂಡವರಿರುವ ಅರಣ್ಯದಲ್ಲಿ ಸಜ್ಜನರನ್ನು ಪೀಡಿಸಿದರೆ ಅವರ ಬಿಡುಗಡೆಗಾಗಿ ಪಾಂಡವರು ಬಂದು ತನ್ನ ಕೋರಿಕೆಯು ನಿಶ್ಚಯವಾಗಿ ಕೊನೆಗಾಣಬಹುದೆಂದುಬಗೆದು ಹೂಡಿದ ಹೂಟವೇ ಈ ಕಬ್ಬದ ತಿರುಳು. ಕನ್ನಡಿಗರೆಲ್ಲರು ನನ್ನೀ ಕೃತಿಗೆ ಕೈಗೊಟ್ಟು ಮುಂದಕ್ಕೆ ಕರೆಯುವರೆಂದು ನನ್ನ ಆಶೆಯು.

ಕನ್ನಡಿಗರಡಿಯಾಳು.

**ಕೃ. ಶ್ರೀ. ಬೆಟಗೇರಿ**

" ಕವಿಭೂಷಣ ".

---

ಹೊಸಮಾದರಿಯು! ನವಜೀವನದ!!

# ಮಾತೃಭೂಮಿ

ಎಂಬ

ಉತ್ತಮವರ್ಗದ ಮಾಸಪತ್ರಿಕೆಯು.

ದೇ. ಭ. ಕರಗುಪ್ಪೀ ಕೃಷ್ಣರಾಯರ ಸ್ಮಾರಕವಾಗಿ ಹೊರಟ ಈ ಪತ್ರಿಕೆಯು ಈಗ ೬ ತಿಂಗಳುಗಳಿಂದ ಎಡೆಬಿಡದೆ ಕನ್ನಡಿಗರ ಸೇವೆಮಾಡಹತ್ತಿದೆ. ಕರ್ನಾಟಕದಲ್ಲಿಯ ಹೆಸರಾದ ಲೇಖಕರ ಲೇಖಮಾಲೆಯಿಂದಿದು ಅಲಂಕರಿಸಲ್ಪಡುವ್ರದು. ಕವಿವರರ ಕಮನಿಯವಾದ ಕವಿತೆಯಿಂದಿದು ಮನೋಹರವಾಗಿರುವ್ರದು. ಕನ್ನಡಿಗರೆಲ್ಲರು ಮಾತೃಭೂಮಿಯ ಮಂಜುಲವಾಣಿಗಳನ್ನು ಕೇಳಿ ಮೋದಪಡದಿರಲಾರರು.

ವಾರ್ಷಿಕ ವರ್ಗಣಿ ಅ. ವೆ. ಸೇರಿ ೩ ರೂ. ೮ ಆಣೆ. ಬಿಡಿಸಂಚಿಕೆಗೆ ೭ ಆಣೆ.

ಕಾರ್ಯದರ್ಶಿ ಮಾತೃಭೂಮಿ
ಹನುಮನಬೀದಿ ಬೆಳಗಾಂವಿ.

---

